# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1034 (1167)

ಸದಸ್ಯರ ಹೆಸರು : ಶ್ರೀ ಎಸ್. ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 07.03.2022

ಉತ್ತರಿಸುವವರು : ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಅರಣ್ಯದಂಚಿನ ಹೊಲಗದ್ದೆಗಳಲ್ಲಿ ಬೆಳೆದ ಬೆಳೆಗಳನ್ನು ಕಾಡು ಪ್ರಾಣಿಗಳು ನಾಶ ಮಾಡುತ್ತಿರುವುದರಿಂದ ರೈತರಿಗೆ ಆಗುತ್ತಿರುವ ನಷ್ಟಗಳ ಬಗ್ಗೆ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಇದಕ್ಕೆ ಶಾಶ್ವತ ಪರಿಹಾರವನ್ನು ಕಂಡುಹಿಡಿಯಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು (ವಿವರ ನೀಡುವುದು) | ಹೌದು.<br><br>ವನ್ಯಪ್ರಾಣಿಗಳ ಹಾವಳಿ ತಡೆಗಟ್ಟಲು ಇಲಾಖಾ ವತಿಯಿಂದ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ:-<br><br>1. ವನ್ಯಪ್ರಾಣಿಗಳಿಗಾಗಿ ಅರಣ್ಯ ಪ್ರದೇಶಗಳ ಒಳಗೆ ನೀರಿನ ಲಭ್ಯತೆ ಹೆಚ್ಚಿಸಲು ರಕ್ಷಿತಾರಣ್ಯಗಳಲ್ಲಿ ಕೆರೆಗಳ ನಿರ್ಮಾಣ ಹಾಗೂ ಪುನಶ್ಚೇತನಗೊಳಿಸಿ ವನ್ಯಪ್ರಾಣಿಗಳ ಆವಾಸ ಸ್ಥಾನವನ್ನು ಅಭಿವೃದ್ಧಿಗೊಳಿಸಲಾಗುತ್ತಿದೆ. ಇದರಿಂದ ಕಾಡಾನೆ ಹಾಗೂ ಇತರೆ ವನ್ಯಪ್ರಾಣಿಗಳು ಕಾಡಿನಿಂದ ಹೊರಗೆ ಬಾರದಂತೆ ತಡೆಯಲಾಗುತ್ತಿದೆ.<br><br>2. ಅರಣ್ಯ ಪ್ರದೇಶಗಳಲ್ಲಿ ಹುಲ್ಲುಗಾವಲು ಸಂರಕ್ಷಣೆ ಹಾಗೂ ಅಭಿವೃದ್ಧಿಗೊಳಿಸಲು ಹೆಚ್ಚಿನ ಅರಣ್ಯ ಪ್ರದೇಶಗಳಲ್ಲಿ ದಟ್ಟವಾಗಿ ಬೆಳೆದ ಲಂಟಾನ ಮತ್ತು ಯುಪಟೋರಿಯಂ ಕಳೆಗಳಿಂದಾಗಿ ಹುಲ್ಲಿನ ಬೆಳವಣಿಗೆಗೆ ತೀವ್ರ ಅಡಚಣೆಯಾಗಿ ಅರಣ್ಯದಲ್ಲಿ ಹುಲ್ಲಿನ ಲಭ್ಯತೆ ಗಣನೀಯವಾಗಿ ಕಡಿಮೆಯಾಗಿರುವುದರಿಂದ ಹುಲ್ಲು ಬೆಳೆಯುವ ಪ್ರದೇಶಗಳಲ್ಲಿ ಬೆಳೆದಿರುವ ಲಂಟಾನ ಮತ್ತು ಯುಪಟೋರಿಯಂ ಕಳೆಗಳನ್ನು ಕಿತ್ತು ಸ್ವಚ್ಛಗೊಳಿಸಿ ಅರಣ್ಯಕ್ಕೆ ಪೂರಕವಾದ ಹುಲ್ಲು ಬೆಳೆಯಲು ಅನುವು ಮಾಡಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ.<br><br>3. ಕಾಡಾನೆಗಳು ಅರಣ್ಯ ಪ್ರದೇಶದಿಂದ ಹೊರಗೆ ಬಾರದಂತೆ ತಡೆಗಟ್ಟಲು ಅರಣ್ಯದಂಚಿನಲ್ಲಿ ಸೌರಶಕ್ತಿ ಬೇಲಿ ನಿರ್ಮಾಣ/ನಿರ್ವಹಣೆ, ಆನೆತಡೆ ಕಂದಕ ನಿರ್ಮಾಣ/ನಿರ್ವಹಣೆ ಮಾಡಲಾಗಿದ್ದು ಮತ್ತು ರೈಲ್ವೆ ಹಳಿಗಳನ್ನು ಉಪಯೋಗಿಸಿ ಬ್ಯಾರಿಕೇಡ್ ನಿರ್ಮಿಸುವ ಕಾಮಗಾರಿಯನ್ನು ಕೈಗೊಳ್ಳಲಾಗಿದೆ.<br><br>4. ಕಾಡಾನೆ ಹಾವಳಿ ತುರ್ತು ನಿರ್ವಹಣೆಗಾಗಿ ಕ್ಷಿಪ್ರ ಕಾರ್ಯಪಡೆ ತಂಡಗಳನ್ನು ರಚಿಸಿ ನಿರ್ವಹಿಸಲಾಗುತ್ತಿದೆ. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | 5. ಕಾಡಾನೆ ಹಿಮ್ಮೆಟ್ಟಿಸುವ ತಂಡಗಳನ್ನು ರಚಿಸಿ ಕಾಡಾನೆಗಳನ್ನು ಕಾಡಿಗೆ ಹಿಮ್ಮೆಟ್ಟಿಸುವ ಕಾರ್ಯ ಕೈಗೊಳ್ಳಲಾಗುತ್ತಿದೆ.<br>6. ನಿಸ್ತಂತು ಜಾಲದ ಮೂಲಕ ಮಾಹಿತಿ ಸಂವಹನ ಮಾಡಲಾಗುತ್ತಿದೆ.<br>7. ಕಾಡಾನೆಗಳ ಮಾಹಿತಿಯನ್ನು ಸಂಗ್ರಹಿಸಲು 24 ಗಂಟೆ ಕಾರ್ಯನಿರ್ವಹಿಸುವ ಮಾಹಿತಿ ಕೇಂದ್ರ ಸ್ಥಾಪಿಸಲಾಗಿದೆ.<br>8. ಕಾಡಾನೆ ಗುಂಪಿನಲ್ಲಿದ್ದ ವಯಸ್ಕ ಹೆಣ್ಣಾನೆಯನ್ನು ಗುರುತಿಸಿ ಅದಕ್ಕೆ ರೇಡಿಯೋ ಕಾಲರ್ ಅಳವಡಿಸಿ ಆನೆಗಳ ಚಲನ-ವಲನಗಳ ಬಗ್ಗೆ ಎಸ್.ಎಂ.ಎಸ್. ಹಾಗೂ ವಾಟ್ಸಾಪ್ ಮೂಲಕ ಜನರಿಗೆ ಮಾಹಿತಿಯನ್ನು ನೀಡಿ ಮಾನವ ಪ್ರಾಣಹಾನಿ ಹಾಗೂ ಮಾನವ ಗಾಯ ತಪ್ಪಿಸಲು ಕ್ರಮ ವಹಿಸಲಾಗುತ್ತಿದೆ.<br>9. ಸಾರ್ವಜನಿಕರಿಗೆ ಉಪಟಳ ನೀಡುತ್ತಿರುವ ಪುಂಡಾನೆಗಳನ್ನು ಗುರುತಿಸಿ, ಸೆರೆಹಿಡಿದು ಆಗ್ಗಿಂದಾಗ್ಗೆ ಆನೆ ಶಿಬಿರಗಳಿಗೆ ಸ್ಥಳಾಂತರಿಸಲಾಗಿದೆ.<br>10. ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾದ ಹಾನಿ ಪ್ರಕರಣಗಳಲ್ಲಿ ದಯಾತ್ಮಕ ಧನವನ್ನು ಪಾವತಿಸಲಾಗುತ್ತಿದ್ದು, ಇತ್ತೀಚಿನ ದಿನಗಳಲ್ಲಿ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾಗುವ ಹಾನಿ ಪ್ರಕರಣಗಳಿಗೆ ಇ-ತಂತ್ರಾಂಶದ ಮೂಲಕ ಅರ್ಜಿಗಳನ್ನು ಸ್ವೀಕರಿಸಲಾಗುತ್ತಿದ್ದು, ಆದ್ಯತೆ ಮೇರೆಗೆ ನಿಯಮಾನುಸಾರ ಪರಿಶೀಲಿಸಿ, ಶೀಘ್ರವೇ ನೇರವಾಗಿ ಸಂತ್ರಸ್ಥರ ಖಾತೆಗೆ ಪಾವತಿಸುವ ಪ್ರಕ್ರಿಯೆಯನ್ನು ಇ-ಪರಿಹಾರ ತಂತ್ರಾಂಶದ ಮೂಲಕ ನಿರ್ವಹಿಸಲಾಗುತ್ತಿದೆ. |
| ಆ) | ಕಳೆದ 3 ವರ್ಷಗಳಲ್ಲಿ ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲೆಯಲ್ಲಿ ಕಾಡುಪ್ರಾಣಿಗಳ ಹಾವಳಿಯಿಂದ ಜಮೀನಿಗೆ ಅಳವಡಿಸಿರುವ ಸೋಲಾರ್ ಬೇಲಿ, ಪಂಪ್ ಸೆಟ್ ಹಾನಿಯ ಪ್ರಮಾಣವೆಷ್ಟು ಮತ್ತು ಎಷ್ಟು ಎಕರೆ ಬೆಳೆ ಹಾನಿಯಾಗಿದೆ; ಯಾವ ಯಾವ ಬೆಳೆ ಹಾನಿಯಾಗಿದೆ; ಸದರಿ ಹಾನಿಗಳಿಗೆ ಸರ್ಕಾರದಿಂದ ವಿತರಿಸಲಾದ ಪರಿಹಾರವೆಷ್ಟು;<br>(ತಾಲ್ಲೂಕುವಾರು ಮಾಹಿತಿ ನೀಡುವುದು) | ಕಳೆದ 3 ವರ್ಷಗಳಲ್ಲಿ ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲೆಯಲ್ಲಿ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾದ ಬೆಳೆಹಾನಿ ಹಾಗೂ ಪಂಪ್ ಹೌಸಗಳು, ಪೈಪ್‌ಲೈನ್‌ಗಳು, ಬೇಲಿಗಳು ಒಳಗೊಂಡಂತೆ ಇತರ ಆಸ್ತಿನಷ್ಟ ಪ್ರಕರಣ ಹಾಗೂ ಪಾವತಿಸಿದ ದಯಾತ್ಮಕ ಧನದ ವಿವರಗಳನ್ನು ಕೋಷ್ಟಕದಲ್ಲಿ ಒದಗಿಸಿದೆ.<br>ಮುಂದುವರೆದು, ಸರ್ಕಾರದ ಆದೇಶ ಸಂಖ್ಯೆ: ಅಪಜೀ 130 ಎಫ್‌ಡಬ್ಲ್ಯೂಎಲ್ 2016, ಬೆಂಗಳೂರು, ದಿನಾಂಕ 19.09.2016ರಂತೆ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾಗುವ ಬೆಳೆ ಹಾನಿ ಪ್ರಕರಣಗಳಲ್ಲಿ ಎಕ್ಸ್‌ಗ್ರೇಷಿಯಾ ಮೊತ್ತವನ್ನು ಸಂಖ್ಯೆ / ಕೆಜಿ ಲೆಕ್ಕದಲ್ಲಿ ಮೌಲ್ಯಮಾಪನ ಮಾಡಿ ನಿಗಧಿಪಡಿಸಿದ ಪರಿಹಾರದ ಮೊತ್ತವನ್ನು ಪಾವತಿಸಲಾಗುತ್ತಿರುವುದರಿಂದ ಹೆಕ್ಟೇರು / ಎಕರೆ ಪ್ರಮಾಣದ ಹಾನಿಯ ವಿವರ ದಾಖಲಿಸಲಾಗುತ್ತಿರುವುದಿಲ್ಲ.<br>ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲೆಗಳಲ್ಲಿ ವನ್ಯಪ್ರಾಣಿಗಳ ಹಾವಳಿಯಿಂದ ಪ್ರಮುಖವಾಗಿ ರಾಗಿ, ಜೋಳ, ಭತ್ತ, ತೆಂಗು, ಬಾಳೆ, ಮಾವು, ಟಮೋಟ, ಹಿರೇಕಾಯಿ, ಕಬ್ಬು, ಬದನ, ನುಗ್ಗೆ, ತೊಗರಿ, ಅವರ ಬೆಳೆಗಳು ಹಾನಿಯಾಗುತ್ತಿರುತ್ತವೆ. |

ತಾಲ್ಲೂಕುವಾರು ಮಾಹಿತಿ

| ಕ್ರ.ಸಂ | ಜಿಲ್ಲೆ | ತಾಲ್ಲೂಕು | 2018-19 ಬೆಳೆಹಾನಿ | | 2019-20 ಬೆಳೆಹಾನಿ | | 2020-21 ಬೆಳೆಹಾನಿ | |
|---|---|---|---|---|---|---|---|---|
| | | | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ |
| 1 | ರಾಮನಗರ | ರಾಮನಗರ | 50 | 2,02,640.00 | 133 | 4,50,700.00 | 34 | 1,86,800.00 |
| | | ಚೆನ್ನಪಟ್ಟಣ | 472 | 26,17,756.00 | 249 | 12,62,515.00 | 536 | 33,17,718.00 |
| | | ಮಾಗಡಿ | 240 | 9,58,850.00 | 169 | 7,36,463.00 | 36 | 2,90,138.00 |
| | | ಕನಕಪುರ | 684 | 40,42,467.00 | 958 | 30,61,503.00 | 965 | 41,00,380.00 |
| 2 | ಬೆಂಗಳೂರು ಗ್ರಾಮಾಂತರ | ನೆಲಮಂಗಲ | 172 | 7,28,551.00 | 30 | 2,82,900.00 | - | - |
| | | ದೊಡ್ಡಬಳ್ಳಾಪುರ | - | - | - | - | - | - |
| | | ಹೊಸಕೋಟೆ | - | - | - | - | - | - |
| | | ದೇವನಹಳ್ಳಿ | - | - | - | - | - | - |
| | | ಬನ್ನೇರುಘಟ್ಟ | 545 | 19,71,271.00 | 595 | 26,61,391.00 | 1400 | 48,21,000.00 |

| ಕ್ರ.ಸಂ | ಜಿಲ್ಲೆ | ತಾಲ್ಲೂಕು | 2018-19 ಆಸ್ತಿ ನಷ್ಟ | | 2019-20 ಆಸ್ತಿ ನಷ್ಟ | | 2020-21 ಆಸ್ತಿ ನಷ್ಟ | |
|---|---|---|---|---|---|---|---|---|
| | | | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ |
| 1 | ರಾಮನಗರ | ರಾಮನಗರ | - | - | - | - | 17 | 1,41,000.00 |
| | | ಚೆನ್ನಪಟ್ಟಣ | - | - | - | - | - | - |
| | | ಮಾಗಡಿ | - | - | - | - | 27 | 2,46,290.00 |
| | | ಕನಕಪುರ | - | - | - | - | - | - |
| 2 | ಬೆಂಗಳೂರು ಗ್ರಾಮಾಂತರ | ನೆಲಮಂಗಲ | - | - | - | - | - | - |
| | | ದೊಡ್ಡಬಳ್ಳಾಪುರ | - | - | - | - | - | - |
| | | ಹೊಸಕೋಟೆ | - | - | - | - | - | - |
| | | ದೇವನಹಳ್ಳಿ | - | - | - | - | - | - |
| | | ಬನ್ನೇರುಘಟ್ಟ | 12 | 28,100.00 | 66 | 2,52,000.00 | 115 | 4,04,000.00 |

......4

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಈ</td><td>ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲೆಯಲ್ಲಿ ಕಾಡುಪ್ರಾಣಿಗಳ ಹಾವಳಿಯನ್ನು ತಡೆಗಟ್ಟಲು ರೂಪಿಸಿರುವ ಯೋಜನೆಗಳು ಯಾವುವು; ಇದಕ್ಕಾಗಿ ಖರ್ಚು ಮಾಡಿರುವ ಅನುದಾನವೆಷ್ಟು? (ತಾಲ್ಲೂಕುವಾರು ಮಾಹಿತಿ ನೀಡುವುದು)</td><td>
ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ವನ್ಯಪ್ರಾಣಿಗಳ ಹಾವಳಿಯನ್ನು ತಡೆಗಟ್ಟಲು ಬಿಡುಗಡೆ ಮಾಡಿದ ಅನುದಾನದ ವಿವರ ಮತ್ತು ಕೈಗೊಂಡ ಕ್ರಮದ ವಿವರ ಈ ಕೆಳಕಂಡಂತಿದೆ.<br>
(ರೂ.ಲಕ್ಷಗಳಲ್ಲಿ)
<table>
<tr><th>ವರ್ಷ</th><th>ಬಿಡುಗಡೆಯಾದ ಅನುದಾನ</th></tr>
<tr><td>2018-19</td><td>24.99</td></tr>
<tr><td>2019-20</td><td>99.89</td></tr>
<tr><td>2020-21</td><td>24.94</td></tr>
</table>
1. ಸಾಕುಪ್ರಾಣಿ ತಡೆ ಕಂದಕ (ಸಿಪಿಟಿ).<br>
2. ಕಾಡಾನೆಗಳು ಅರಣ್ಯ ಪ್ರದೇಶದಿಂದ ಹೊರಗೆ ಬಾರದಂತೆ ತಡೆಗಟ್ಟಲು ಅರಣ್ಯದಂಚಿನಲ್ಲಿ ಆನೆತಡೆ ಕಂದಕ ನಿರ್ಮಾಣ/ನಿರ್ವಹಣೆ ಮಾಡಲಾಗುತ್ತಿದೆ.<br>
3. ಚಿರತೆಯಿಂದ ಸಾಕು ಪ್ರಾಣಿಗಳು ಹತ್ಯೆ ತಡೆಗಟ್ಟಲು ಬೋನ್ ಇಟ್ಟು ಸೆರೆಹಿಡಿಯುವುದು.<br>
4. ಕಾಡಿಂಚಿನ ಹಳ್ಳಿಗಳ ಜನರಲ್ಲಿ ವನ್ಯಪ್ರಾಣಿಗಳ ಬಗ್ಗೆ ಅರಿವು ಮೂಡಿಸುವುದು.<br>
5. ರಾತ್ರಿ ವೇಳೆಯಲ್ಲಿ ಗಸ್ತು.<br>
6. ರಾತ್ರಿ ವೇಳೆಯಲ್ಲಿ ಗಸ್ತು ತಿರುಗಲು ತಂಡ ರಚಿಸಿ ಗಸ್ತು ಕಾರ್ಯ ನಿರ್ವಹಿಸಲಾಗುತ್ತಿದೆ.<br><br>
ರಾಮನಗರ ಜಿಲ್ಲೆಯಲ್ಲಿ ವನ್ಯಪ್ರಾಣಿಗಳ ಹಾವಳಿಯನ್ನು ತಡೆಗಟ್ಟಲು ಬಿಡುಗಡೆ ಮಾಡಿದ ಅನುದಾನದ ವಿವರ ಮತ್ತು ಕೈಗೊಂಡ ಕ್ರಮದ ವಿವರ ಈ ಕೆಳಕಂಡಂತಿದೆ.<br>
(ರೂ.ಲಕ್ಷಗಳಲ್ಲಿ)
<table>
<tr><th>ವರ್ಷ</th><th>ಬಿಡುಗಡೆಯಾದ ಅನುದಾನ</th></tr>
<tr><td>2018-19</td><td>265.17</td></tr>
<tr><td>2019-20</td><td>337.292</td></tr>
<tr><td>2020-21</td><td>278.13</td></tr>
</table>
1. ಕಾಡಾನೆಗಳು ಅರಣ್ಯ ಪ್ರದೇಶದಿಂದ ಹೊರಗೆ ಬಾರದಂತೆ ತಡೆಗಟ್ಟಲು ಅರಣ್ಯದಂಚಿನಲ್ಲಿ ಆನೆತಡೆ ಕಂದಕ ನಿರ್ಮಾಣ/ನಿರ್ವಹಣೆ ಮಾಡಲಾಗುತ್ತಿದೆ.<br>
2. ರೈಲ್ವೆ ಹಳಿಗಳನ್ನು ಉಪಯೋಗಿಸಿ ರೈಲ್ವೆ ಬ್ಯಾರಿಕೇಡ್ ನಿರ್ಮಿಸುವ ಕಾಮಗಾರಿಯನ್ನು ಕೈಗೊಳ್ಳಲಾಗಿದೆ.<br>
3. ಟೆಂಟಕಲ್ ಸೋಲಾರ್ ಫೆನ್ಸ್ ನಿರ್ಮಾಣ ಕಾಮಗಾರಿಯನ್ನು ಕೈಗೊಳ್ಳಲು ಕ್ರಮವಹಿಸಲಾಗಿರುತ್ತದೆ.<br>
4. ಕಾಡಾನೆ ಹಿಮ್ಮೆಟ್ಟಿಸುವ ತಂಡಗಳನ್ನು ರಚಿಸಿ ಕಾಡಾನೆಗಳನ್ನು ಕಾಡಿಗೆ ಹಿಮ್ಮೆಟ್ಟಿಸುವ ಕಾರ್ಯ ಕೈಗೊಳ್ಳಲಾಗುತ್ತಿದೆ.
</td></tr>
</table>

.....5

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| | | 5. ಕಾಡಾನೆ ಹಾವಳಿ ತುರ್ತು ನಿರ್ವಹಣೆಗಾಗಿ ಕ್ಷಿಪ್ರ ಕಾರ್ಯಪಡೆ ತಂಡಗಳನ್ನು ರಚಿಸಿ ನಿರ್ವಹಿಸಲಾಗುತ್ತಿದೆ.<br>6. ಕಳ್ಳಬೇಟೆ ತಡೆ ಶಿಬಿರಗಳನ್ನು ರಚಿಸಿ ನಿರ್ವಹಿಸಲಾಗುತ್ತಿದೆ.<br>7. ದಿನದ 24 ಗಂಟೆ ಕಾಡಾನೆಗಳ ಚಲನ-ವಲನದ ಬಗ್ಗೆ ನಿಗಾವಹಿಸಲು ಗಸ್ತು ಕಾರ್ಯ ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ: ಅಪಜೀ 43 ಎಫ್‌ಡಬ್ಲ್ಯೂಎಲ್ 2022

(ಉಮೇಶ್ ವಿ. ಕತ್ತಿ)
ಅರಣ್ಯ, ಆಹಾರ, ನಾಗರಿಕ ಸರಬರಾಜು
ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು